# ಓದುವುದು ಮತ್ತು ಬರೆಯುವುದನ್ನು ಅನುಕೂಲಿಸುವುದು

*– ಚನ್ನಪ್ಪ ಯಂಟಮಾನ*

## ಲೇಖನದ ಸಾರಾಂಶ

*ಈ ಲೇಖನವನ್ನು ಯಾದಗಿರಿ ಜಿಲ್ಲೆಯ ಸುರಪುರ ತಾಲ್ಲೂಕಿನ ಸರ್ಕಾರಿ ಶಾಲೆಯ ಶಿಕ್ಷಕರೊಂದಿಗೆ ಅರ್ಥ ರೂಪಣೆಯ ದೃಷ್ಟಿಕೋನದ ಆಧಾರದ ಮೇಲೆ ಬರೆಯುವ ಮತ್ತು ಓದುವ ಪ್ರಕ್ರಿಯೆಯನ್ನು ಅನುಕೂಲಿಸುವುದರ ಕುರಿತಾಗಿ ನಡೆಸಿದ ಪ್ರಾತ್ಯಕ್ಷಿಕೆಯನ್ನು ಆಧಾರವಾಗಿರಿಸಿಕೊಂಡು ಬರೆಯಲಾಗಿದೆ. ಈ ಅನುಕೂಲಿಸುವಿಕೆಯ ಪ್ರಕ್ರಿಯೆಯನ್ನು ಗಮನಿಸಲು ಕಾರ್ಯಹಾಳೆಯನ್ನು (worksheet) ಸಾಧನವಾಗಿ ಬಳಸಿಕೊಳ್ಳಲಾಯಿತು. ಇದಕ್ಕಾಗಿ, ಮೊದಲಿಗೆ ಕಾರ್ಯಹಾಳೆಯನ್ನು ವಿನ್ಯಾಸಗೊಳಿಸುವ ಮತ್ತು ಅದನ್ನು ಬಳಸುವ ರೂಪುರೇಷೆಯನ್ನು ಸಿದ್ಧಪಡಿಸಿಕೊಳ್ಳಲಾಯಿತು. ಇದನ್ನು ಹೇಗೆ ವಿಭಿನ್ನವಾಗಿ ಮಾಡಬೇಕು ಎನ್ನುವುದನ್ನು ಕಾರ್ಯಹಾಳೆಯ ತಯಾರಿಕೆಯ ಪ್ರಕ್ರಿಯೆಯು ಕಲಿಸಿಕೊಟ್ಟಿತ್ತು. ಶಿಕ್ಷಕರ ಸಹಯೋಗದಲ್ಲಿ ಪ್ರಮಾಣೀಕೃತ ಮತ್ತು ಪ್ರಾದೇಶಿಕ ಕನ್ನಡಗಳಲ್ಲಿ ಕಾರ್ಯಹಾಳೆಯನ್ನು ಪುನರ್ ವಿನ್ಯಾಸಗೊಳಿಸಲಾಯಿತು. ಈ ಪುನರ್ ವಿನ್ಯಾಸಗೊಂಡ ಕಾರ್ಯಹಾಳೆಗೆ ಮಕ್ಕಳಿಂದ ಓದುವ ಮತ್ತು ಬರೆಯುವಿಕೆಯ ಪ್ರಕ್ರಿಯೆಗೆ ಹೆಚ್ಚಿನ ಸ್ಪಂದನೆ ದೊರಕಿತು. ಇದು ಅಂತಿಮವಾಗಿ ಏನನ್ನು ಹೇಳುತ್ತದೆ ಎಂದರೆ, ಅನುಕೂಲಿಸುವಿಕೆಯ ಪ್ರಯತ್ನಕ್ಕೆ ಮಕ್ಕಳು ಶಾಲೆಗೆ ತರುವ ಭಾಷಿಕ ಸಂಪನ್ಮೂಲಗಳ ಬಗೆಗೆ ಅನುಕೂಲಿಸುವವರಿಗೆ ಸ್ಪಷ್ಟ ಜ್ಞಾನವಿರಬೇಕು. ಅವುಗಳ ಮೌಲ್ಯವನ್ನು ಗುರುತಿಸಿ ಅದರ ಆಧಾರದ ಮೇಲೆ ಕಲಿಕೆಗೆ ಸಹಾಯ ಮತ್ತು ಯೋಜನೆಯನ್ನು ರೂಪಿಸಿರಬೇಕು. ಮಕ್ಕಳ ಸುತ್ತಮುತ್ತಲಿನ ಪರಿಸರದ (ಇದು ಭಾಷಿಕ ಪರಿಸರವನ್ನು ಒಳಗೊಳ್ಳುತ್ತದೆ) ಸಂಪರ್ಕದಲ್ಲಿರುವ ಈ ರೀತಿಯ ಸಾಕ್ಷರತಾ ಬೆಳವಣಿಗೆ ಪ್ರಕ್ರಿಯೆಯು ಹೆಚ್ಚು ಪರಿಣಾಮಕಾರಿಯಾಗಿರುತ್ತದೆ ಮತ್ತು ಇದು ಮಕ್ಕಳ ಓದುವಿಕೆ ಮತ್ತು ಬರೆಯುವಿಕೆಯನ್ನು ಹೆಚ್ಚು ಅರ್ಥಪೂರ್ಣವಾಗಿಸುತ್ತದೆ. ಈ ಲೇಖನದ ಕೊನೆಯಲ್ಲಿ ಸುರಪುರದ ಇತರ ಶಾಲೆಗಳ ಶಿಕ್ಷಕರಿಗೂ ಈ ಪ್ರಕ್ರಿಯೆಯನ್ನು ಕುರಿತು ಮಾಹಿತಿ ನೀಡಿದ್ದನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.*

## ಪೀಠಿಕೆ

ಯಾದಗಿರಿಯ ಜಿಲ್ಲೆಯ ಸರ್ಕಾರಿ ಶಾಲೆಗಳ ನನ್ನ ಭೇಟಿಗಳಲ್ಲಿ ನಾನು ಮತ್ತೇ ಮತ್ತೇ ಗಮನಿಸಿದ್ದೇನೆಂದರೆ, ಅಲ್ಲಿಯ ಶಾಲೆಗಳಲ್ಲಿ ಓದುತ್ತಿದ್ದ ಮಕ್ಕಳ ಮನೆ

ಭಾಷೆಯು ಕನ್ನಡದ್ದೇ ಆದ ಉಪಭಾಷೆಯಾಗಿದ್ದರೂ ಪ್ರಥಮ ಭಾಷೆಯಾದ ಕನ್ನಡವನ್ನು ಕಲಿಯುವಲ್ಲಿ ಅವರು ಕಷ್ಟಪಡುತ್ತಿದ್ದದ್ದು ಕಂಡುಬಂದಿತು. ಮಕ್ಕಳು ಶಾಲೆಗೆ ಸೇರ್ಪಡೆಯಾದಾಗ ಭಾಷೆಯ ಆಲಿಕೆಯ ಶಬ್ದವನ್ನು (Sound) ಕುರಿತು ತಮ್ಮದೇ ಆದ ಜ್ಞಾನವನ್ನು ಹೊಂದಿರುತ್ತಾರೆ. ಶಾಲೆಗೆ ಸೇರ್ಪಡೆಯಾದ ನಂತರದಲ್ಲಿ ಅವರು ಈ ಆಲಿಕೆಯ ಶಬ್ದವನ್ನು ಸಂಜ್ಞೆಯ ಶಬ್ದಗಳಾಗಿ ಬರೆಯಲು ಹಾಗೂ ಅವುಗಳಿಂದ ಪದ ಮತ್ತು ವಾಕ್ಯಗಳನ್ನು ಸಂಯೋಜಿಸಲು ಕಲಿಯುತ್ತಾರೆ, ಭಾಷೆಯನ್ನು ಸೃಜನಶೀಲವಾಗಿ ಬಳಸಿ ಮತ್ತು ದೋಷಗಳನ್ನು ಕಂಡುಕೊಳ್ಳುತ್ತಾರೆ. ಅವರ ಉಚ್ಚಾರಣೆಯಲ್ಲಿ ಕನ್ನಡ ಭಾಷೆಯಲ್ಲಿನ ವ್ಯಾಕರಣದ ನಿಯಮಗಳು ಅಂತರ್ಗತವಾಗಿರುತ್ತವೆ. ಹೀಗಿದ್ದರೂ ಓದುವ ಮತ್ತು ಬರೆಯುವ ವಿಚಾರಕ್ಕೆ ಬಂದಾಗ ಮಕ್ಕಳು ಸಾಕಷ್ಟು ಕಷ್ಟಗಳನ್ನು ಎದುರಿಸುತ್ತಾರೆ. ಸಾಮಾನ್ಯವಾಗಿ, ಕನ್ನಡವನ್ನು ಕಲಿಸುವಾಗ ಒಂದೊಂದೇ ಅಕ್ಷರಗಳನ್ನು ಕಲಿಸುತ್ತಾರೆ: ಸ್ವರ ಮತ್ತು ವ್ಯಂಜನಗಳನ್ನು ಕೂಡಿಸುವುದು, ಒತ್ತಕ್ಷರಗಳು, ಇವುಗಳನ್ನು ಒಟ್ಟುಗೂಡಿಸಿ ಪದಗಳನ್ನು, ವಾಕ್ಯಗಳನ್ನು ಮತ್ತು ಸಂಪೂರ್ಣ ಪಠ್ಯಗಳಲ್ಲಿ ಓದುವುದನ್ನು ಕಲಿಸುತ್ತಾರೆ. ಹೀಗೆ ಕಲಿಸುವುದರಿಂದ ಮಗು ಆಯಾ ತರಗತಿಯಲ್ಲಿ ಹೊಂದಬೇಕಾದ ಕಲಿಕಾ ಮಟ್ಟವನ್ನು ಸಾಧಿಸುವುದು ಕಷ್ಟವಾಗುತ್ತದೆ. ಉದಾ: ಕೋತಿ ಮರ ಏರಾಕತ್ತೈತಿ ಎನ್ನುವ ಚಿತ್ರಸಹಿತ ವಾಕ್ಯವನ್ನು ಓದಲು ನೀಡಿದಾಗ ಅಕ್ಷರ, ಪದ, ಕಾಗುಣಿತ ಕ್ರಮದಲ್ಲಿ ಭಾಷೆಯನ್ನು ಕಲಿತ ಮಗು ಕೋ ಎನ್ನುವ ಅಕ್ಷರವನ್ನು ಕೂ ಎಂದು ಕೈ ಎಂದು ಉಚ್ಚರಿಸಲು ಪ್ರಾರಂಭಿಸಿತು. ಇದೇ ತರಹ ಇನ್ನೊಂದು ಮಗು ತನ್ನ ಕೈ ಬೆರಳಿನಿಂದ ಕ, ಕಾ, ಕಿ ಎಂದು ಕಾಗುಣಿತವನ್ನು ಬಾಯಿಯಿಂದ ಹೇಳುತ್ತಾ ಎಣಿಸಲು ಪ್ರಾರಂಭಿಸಿತು. ಆ ಮಗುವಿಗೆ ಆ ಪದವು ಕೋತಿ ಎಂದು ಹೇಳಿದಾಗ ಕೋತಿ ಎಂದು ಸರಿಯಾಗಿ ಓದಿ ಮುಂದಿನ ಪದದಲ್ಲಿರುವ ಮ ಅಕ್ಷರವನ್ನು ವ ಎಂದು ಯ ಎಂದು ಉಚ್ಚರಿಸಲು ಪ್ರಾರಂಭಿಸಿತು. ಇಲ್ಲಿ ಆ ಮಗುವಿಗೆ ಚಿತ್ರದಲ್ಲಿ ಇರುವ ಕೋತಿ, ಮರ ಮತ್ತು ಏರಾಕತ್ತೈತಿ ಎನ್ನುವ ಪದಗಳು ಪರಿಚಿತವಾಗಿದ್ದರೂ, ಮೂಲಾಕ್ಷರಗಳ ಪರಿಚಯ ಸ್ವಲ್ಪಮಟ್ಟಿಗೆ, ವಾಕ್ಯದಲ್ಲಿರುವ ಘಟನೆಯು ಪರಿಚಿತವಿದ್ದರೂ ಕೋತಿ ಎಂದು ಓದಿದ ನಂತರ ಮರ ಎನ್ನುವ ಪದವನ್ನು ಕನ್ನಡ ಭಾಷೆಯ ವಾಕ್ಯ ನಿಯಮಕ್ಕೆ ಅನುಸಾರವಾಗಿ ಊಹೆ ಮಾಡಿ ಓದದೇ ವ, ಯ ಎಂದು ಓದುತ್ತದೆ ಎಂದರೆ ಇದಕ್ಕೆ ಕಾರಣ ನಾವು ಕಲಿಸುವ ವರ್ಣಮಾಲಾ ಪದ್ಧತಿಯಾಗಿದೆ. ಈ ರೀತಿಯ ಕಲಿಸುವಿಕೆಯ ಸಮಸ್ಯೆಯಿಂದಾಗಿ ಮುಂದಿನ ತರಗತಿಯಲ್ಲಿ ಮಕ್ಕಳು ಕಷ್ಟಪಡುವಂತಾಗುತ್ತದೆ. ಇದರ ಪರಿಣಾಮವಾಗಿ ಮಗುವು 6 ಅಥವಾ 7ನೇ ತರಗತಿಯವರೆಗೆ ಶಾಲಾ ದಿನಗಳನ್ನು ಪೂರ್ಣಗೊಳಿಸಿದರೂ ಒಂದು ಪಠ್ಯವನ್ನು ಅರ್ಥಪೂರ್ಣವಾಗಿ ಓದುವ, ವಿಶ್ಲೇಷಿಸುವ, ಅನಿಸಿಕೆ, ಅಭಿಪ್ರಾಯ, ತರ್ಕ, ಕಲ್ಪನೆಗಳನ್ನು ರೂಪಿಸಿಕೊಳ್ಳುವ, ದಿನಪತ್ರಿಕೆಗಳಲ್ಲಿನ ಸುದ್ದಿಯನ್ನು ತಿಳಿದುಕೊಂಡು ಪ್ರತಿಕ್ರಿಯಿಸುವ, ತನ್ನ ಯೋಚನೆಗಳನ್ನು ಭಾಷೆಯಲ್ಲಿ ಹಿಡಿದಿಟ್ಟುಕೊಳ್ಳುವ, ಸುಸಂಬದ್ಧವಾದ ಅಭಿವ್ಯಕ್ತಿಯನ್ನು ಪ್ರದರ್ಶಿಸುವ, ಶಾಲೆಯ ಉಳಿದ ವಿಷಯಗಳಲ್ಲಿನ ಪರಿಕಲ್ಪನೆಗಳನ್ನು ಸಂರಚಿಸಿಕೊಳ್ಳುವ – ಇವೇ ಮೊದಲಾದ

ಸಾಮರ್ಥ್ಯಗಳನ್ನು ಗಳಿಸಿಕೊಳ್ಳುವಲ್ಲಿ ಹೆಣಗಾಡುತ್ತದೆ. ಇವೆಲ್ಲಕ್ಕೂ ಕಾರಣ ನಾವು ಮಗುವಿಗೆ ಭಾಷೆಯನ್ನು ಅನುಕೂಲಿಸುವ ವಿಧಾನವಾಗಿರುತ್ತದೆ. ಇದರರ್ಥ ಸಾಂಪ್ರದಾಯಿಕ ವಿಧಾನದಲ್ಲಿ ವರ್ಣಮಾಲೆಗಳನ್ನು ಕಲಿತ ಮಕ್ಕಳು ಈ ರೀತಿಯ ಸವಾಲುಗಳನ್ನು ಎದುರಿಸುತ್ತಾರೆ ಎಂದಲ್ಲ. ಬದಲಾಗಿ ಈ ರೀತಿಯ ಸಾಂಪ್ರದಾಯಿಕ ವಿಧಾನವು ಎಲ್ಲ ಮಕ್ಕಳಿಗೂ ಸೂಕ್ತವಲ್ಲ ಎನ್ನುವುದನ್ನು ಈ ಮೂಲಕ ತಿಳಿಸಲು ಪ್ರಯತ್ನಿಸಲಾಗಿದೆ. ಯಾರಾದರೂ ಶಿಕ್ಷಕರನ್ನು ಕುರಿತು ಮಕ್ಕಳೇಕೆ ತಮ್ಮ ಭಾಷೆಯನ್ನು ವಿಚಾರಗಳನ್ನು ಅಭಿವ್ಯಕ್ತಿಸಲು, ಅವರ ಭಾಷೆಯ ಮೂಲಕ ಯೋಚಿಸುವ ಇತ್ಯಾದಿ ಉದ್ದೇಶಗಳಿಗೆ ಬಳಸುವುದಿಲ್ಲವೆಂದು ಕೇಳಿದಾಗ ಅವರು ಕೊಡುವ ಪ್ರತಿಕ್ರಿಯೆಯು ಸರ್ವೇ ಸಾಧಾರಣವಾಗಿ ಹೀಗಿರುತ್ತದೆ: "ನಾವು ನಮ್ಮ ಕರ್ತವ್ಯವನ್ನು ಮಾಡಿದ್ದೇವೆ. ಮಕ್ಕಳು ಓದಲು ಮತ್ತು ಬರೆಯಲು ಸಮರ್ಥರಿದ್ದಾರೆ, ಅವರಲ್ಲಿ ಚಿಂತಿಸುವ ಶಕ್ತಿ ಇಲ್ಲದಿದ್ದರೆ ನಾವೇನು ಮಾಡಲು ಬರುವುದಿಲ್ಲ." ಭಾಷೆಯ ಕಲಿಕೆ ಎನ್ನುವುದು ಕೇವಲ ಅಕ್ಷರಮಾಲೆ ಅಥವಾ ಪದಗಳಿಗೆ ಸಂಬಂಧಿಸಿದ್ದಲ್ಲ. ಓದುವುದನ್ನು ಅರ್ಥಮಾಡಿಕೊಳ್ಳುವುದು ಮತ್ತು ಭಾಷೆಯನ್ನು ಬಳಸಿ ಒಂದು ವಿಚಾರವನ್ನು ಅಭಿವ್ಯಕ್ತಿಸುವುದು ಎಂದರೆ, ಅದು ಮಕ್ಕಳು ಸಾಧಿಸಬೇಕಾದ ಸಾಮರ್ಥ್ಯದ ಭಾಗವಾಗಿದೆ. ಹೀಗೆ ಹೇಳಿದಾಗ ಉದ್ಭವಿಸುವ ಪ್ರಶ್ನೆ ಎಂದರೆ, ಇದು ಮಕ್ಕಳು ಸಾಧಿಸಬೇಕಾದ ಸಾಮರ್ಥ್ಯವೆಂದರೆ ಅದಕ್ಕೆ ಅನುಕೂಲ ಮಾಡಿಕೊಡುವುದು ಹೇಗೆ? ಈ ಪ್ರಶ್ನೆಗೆ ಉತ್ತರವನ್ನು ಮುಂದಿನ ವಿಭಾಗವು ಒಂದು ಉದಾಹರಣೆಯ ಮೂಲಕ ನೀಡುವ ಪ್ರಯತ್ನಮಾಡುತ್ತದೆ.

ಅರ್ಥ ರೂಪಣೆಯನ್ನು ಆಧಾರವಾಗಿರಿಸಿಕೊಂಡು ಓದುವುದು ಮತ್ತು ಬರೆಯುವುದನ್ನು ಅನುಕೂಲಿಸುವ ವಿಧಾನ ಓದು ಮತ್ತು ಬರೆಯುವುದು ಕೇವಲ ಸಂಕೇತಿಕರಣ ಮತ್ತು ವಿಸಂಕೇತಿಕರಣದ ಕೌಶಲ್ಯಗಳಲ್ಲ. ಅವುಗಳು ಅರ್ಥ ರೂಪಣೆಯೊಂದಿಗೆ ಕೆಲಸ ಮಾಡುತ್ತವೆ. ಈ ದೃಷ್ಟಿಕೋನದಿಂದ ಮಾಡಬೇಕಾದ ಪ್ರಾಥಮಿಕ ಕೆಲಸವೆಂದರೆ, ಮಕ್ಕಳಿಗೆ ಶಾಲೆಯ ಬರಹದ ಭಾಷೆ ಮತ್ತು ಪರಿಸರದ ಜೊತೆಗೆ ಬೆಸುಗೆಯನ್ನು ಏರ್ಪಡಿಸುವುದು. ಬರವಣಿಗೆ ಸಂಪನ್ಮೂಲಗಳು ಮಗುವಿನ ಪರಿಸರದಲ್ಲೂ ಸಹ ಕಂಡು ಬರುತ್ತವೆ. ಉದಾಹರಣೆಗೆ ಸಾಬೂನಿನ ಹೆಸರು, ಸಂಕೇತ ಬೋರ್ಡ್‌ಗಳು, ರಸ್ತೆಯ ಹೆಸರು, ಪೋಸ್ಟರ್‌ಗಳು, ಪ್ಯಾಕಿಂಗ್ ಆಗಿ ಬರುವ ವಸ್ತುಗಳ ಮೇಲಿನ ಹೆಸರುಗಳು (ಟೂತ್ ಪೇಸ್ಟ್ ಡಬ್ಬ, ಸೋಪ್ ಮತ್ತು ಪೌಡರ್ ಕವರ್‌ಗಳು) ಇತ್ಯಾದಿಗಳು. ಇವುಗಳನ್ನು ಶಿಕ್ಷಕರು ಮಕ್ಕಳಿಗೆ ಬರೆಯುವುದನ್ನು ಕಲಿಸುವುದಕ್ಕೆ ಬಳಸಬಹುದು. ಚಿತ್ರಸಹಿತ ಪದಗಳು, ವಾಕ್ಯಗಳು, ಸರಣಿ ಚಿತ್ರ ಕಥೆಗಳ ದೃಷ್ಟಾಂತಗಳು, ಇತ್ಯಾದಿ ಬರಹದ ರೂಪದಲ್ಲಿರುವುದನ್ನು ಬಳಸುವುದು ಬಹಳ ಮುಖ್ಯವಾದುದು. ಒಂದು ಹಂತದವರೆಗೆ, ಮಕ್ಕಳ ಪರಿಸರದಲ್ಲಿನ ಬರಹದ ರೂಪದಲ್ಲಿ ಲಭ್ಯ ಇರುವ ದಿನಬಳಕೆಯ ಸಾಮಗ್ರಿಗಳ ಬಳಕೆಯು ಅವರ ಪರಿಸರದಲ್ಲಿ ಇರುವ ಮುದ್ರಿತ ಮತ್ತು ಬರಹ ರೂಪದಲ್ಲಿರುವವುಗಳನ್ನು ಓದಲು ಅವಕಾಶ ಮಾಡಿಕೊಡುತ್ತವೆ. ಇವು ಅಮೂರ್ತ ತತ್ವಗಳು. ಇವನ್ನು ಮೂರ್ತರೂಪದಲ್ಲಿ ಶಿಕ್ಷಕರಿಗೆ ಒದಗಿಸಿಕೊಡುವುದು

ಮತ್ತು ಈ ದೃಷ್ಟಿಕೋನವು ಹೇಗೆ ಕಾರ್ಯ ಸಾಧ್ಯ ಎನ್ನುವುದನ್ನು ಅವರಿಗೆ ತೋರಿಸಿಕೊಡುವ ಜವಾಬ್ದಾರಿ ನಮ್ಮ ಮೇಲಿದ್ದಿತು. ಈ ಅಂಶಗಳನ್ನು ಗಮನದಲ್ಲಿಟ್ಟುಕೊಡು ಕಾರ್ಯಹಾಳೆಯ ಬಳಕೆ ಮತ್ತು ವಿನ್ಯಾಸವನ್ನು ತೋರಿಸಿ ಕೊಡಲು ಮತ್ತು ಅವರೇ ಅದನ್ನು ಬಳಸಿ ಮಕ್ಕಳಿಗೆ ಹೇಗೆ ಸಹಾಯವಾಗುತ್ತದೆಂದು ಅವರೇ ಕಂಡುಕೊಳ್ಳಲು ಸಹಾಯವಾಗುವಂತೆ ಅದರ ವಿನ್ಯಾಸವನ್ನು ರೂಪಿಸಲಾಯಿತು. ಇದಕ್ಕಾಗಿ ನಾವು ಸುರಪುರದ ಐದು ಶಾಲೆಗಳ ಶಿಕ್ಷಕರ ಸಹಯೋಗದೊಂದಿಗೆ ಕೆಲಸ ಮಾಡಿದೆವು.

## ಕಾರ್ಯಹಾಳೆಯನ್ನು ವಿನ್ಯಾಸಗೊಳಿಸುವುದು

ಕಾರ್ಯಹಾಳೆಯ ವಿನ್ಯಾಸಕ್ಕೆ ಕೆಳಗಿನ ಪೂರ್ವಗ್ರಹಿಕೆಗಳು ಮಾರ್ಗದರ್ಶಕವಾಗಿದ್ದವು.

- ಮಗು ಯಾವುದೇ ಅಕ್ಷರದಿಂದ ಲಿಖಿತ ಭಾಷಾ ಕಲಿಕೆಯನ್ನು ಪ್ರಾರಂಭಿಸಬಹುದು.
- ಮಗುವು ಭಾಷೆಯನ್ನು ಕಟ್ಟುವ ಪ್ರಕ್ರಿಯೆಯಿಂದ ಕಲಿಯುತ್ತದೆ.
- ಈಗಾಗಲೇ ಪರಿಚಯಿಸಿಕೊಂಡ ಅಕ್ಷರಗಳನ್ನು ಬಳಸಿಕೊಂಡು ಮುಂದಿನ ಪದಗಳನ್ನು ಓದುವುದನ್ನು ಕಲಿಯುತ್ತದೆ.
- ಅಕ್ಷರಗಳನ್ನು ಮಗು ಬಿಡಿ ಬಿಡಿಯಾಗಿ ಕಲಿತು ಅನಂತರ ಓದಲು, ಬರೆಯಲು ಕಲಿಯುತ್ತದೆ ಎಂಬ ತತ್ವವನ್ನು ಅಲ್ಲಗಳೆಯುತ್ತದೆ.
- ಚಿತ್ರಗಳ ವೀಕ್ಷಣೆ ಮತ್ತು ಬರವಣಿಗೆಯ ಪ್ರಕ್ರಿಯೆಯಲ್ಲಿಯೇ ಮಗು ಕನ್ನಡದ ಅಕ್ಷರಗಳ ಜ್ಞಾನವನ್ನು ಪಡೆದುಕೊಳ್ಳುತ್ತದೆ.

ಕ್ರಮೇಣ ಸೇರಿಸಿಕೊಂಡ ಹೊಸ ಪೂರ್ವಗ್ರಹಿಕೆಯೆಂದರೆ, ಕಾರ್ಯಹಾಳೆಯು ಪ್ರಮಾಣೀಕೃತ ಕನ್ನಡ ಮತ್ತು ಉಪಭಾಷೆಯಲ್ಲಿ ಒಂದೇ ಆಗಿರುವ ಪದಗಳನ್ನು ಹೊಂದಿರಬೇಕು.

ಕಾರ್ಯಹಾಳೆಯು ಎರಡು ಕಾಲಮ್‌ಗಳನ್ನು ಹೊಂದಿತ್ತು. ಮೊದಲನೆಯ ಕೋಷ್ಟಕವು ಚಿತ್ರವನ್ನು ಮತ್ತು ಎರಡನೆಯ ಕಾಲಮ್ ಪದಗಳನ್ನು ಓದಲು ಮತ್ತು ಬರೆಯಲು ಸ್ಥಳವನ್ನು ಒದಗಿಸುತ್ತದೆ. ಇಲ್ಲಿ ಮಕ್ಕಳು ಚಿತ್ರವನ್ನು ಗಮನಿಸಿ, ಅದನ್ನು ಸೂಚಿಸುವ ಪದವನ್ನು ಬರೆದು ನಂತರ ಓದಬೇಕು ಎಂದು ನಿರೀಕ್ಷಿಸಲಾಗುತ್ತದೆ. ಮೊದಲನೆಯ ಚಿತ್ರವು ಸಂಪೂರ್ಣವಾದ ಚಿತ್ರಸಹಿತ ಪದದೊಂದಿಗೆ ಪ್ರದರ್ಶಿತವಾಗಿತ್ತು. ಕಾರ್ಯಹಾಳೆಯ ಸೂಚನೆಯ ಪ್ರಕಾರ "ಚಿತ್ರವನ್ನು ನೋಡು, ಪದವನ್ನು ಬರೆ ಮತ್ತು ಪದವನ್ನು ಓದಿ ಹೇಳು" ಎಂದಿದ್ದಿತು. ಕಾರ್ಯ ಹಾಳೆಯಲ್ಲಿ ಬರೆದಿದ್ದ ಪದಗಳೆಂದರೆ ಉದಾಹರಣೆಗೆ 'ಆಡು', 'ಕಾಡು', 'ಕಾಗೆ', 'ಹೊಗೆ', 'ಹೊಲ', 'ಮೊಲ' ಇತ್ಯಾದಿ.

ಪ್ರಮಾಣೀಕೃತ ಕನ್ನಡ ಮತ್ತು ಉಪಭಾಷೆಯ ಕನ್ನಡದ ನಡುವಿನ ವ್ಯತ್ಯಾಸವನ್ನು ನಂತರದಲ್ಲಿ ಬೆಸೆಯಲಾಯಿತು ಮತ್ತು ಎರಡು ರೀತಿಯಲ್ಲಿಯೂ ಕಾರ್ಯಹಾಳೆಯನ್ನು ಸಿದ್ಧಪಡಿಸಲಾಯಿತು. ಈ ಎರಡೂ ಆವೃತ್ತಿಗಳಲ್ಲಿ ಒಂದೇ ಆಗಿದ್ದ ಪದಗಳನ್ನು ಈ ಕಾರ್ಯಹಾಳೆಯು ಒಳಗೊಂಡಿತ್ತು.

## ಚಿತ್ರಗಳನ್ನು ನೋಡುತ್ತಾ ಪದಗಳನ್ನು ಬರೆ ಮತ್ತು ಓದು

| ಚಿತ್ರಗಳು | ಪದಗಳು | ಚಿತ್ರಗಳು | ಪದಗಳು |
|---|---|---|---|
|  | ಆ ಡು |  | ಕಾ ___ |
|  | ___ ಗೆ |  | ಹೊ ___ |
|  | ___ ಲ |  | ಮೊ ___ |
|  | ___ ಸ ರು |  | ಕೆ ___ ___ |
|  | ಕ ___ |  | ___ ___ಳು |

**ಕಾರ್ಯಹಾಳೆಯನ್ನು ಬಳಸುವುದು**

**ಶಿಕ್ಷಕ** : (ಶಿಕ್ಷಕರು ಮಗುವಿಗೆ ಈ ಕಾರ್ಯಹಾಳೆಯನ್ನು ಕೊಟ್ಟು) ಈ ಚಿತ್ರದಲ್ಲಿ ಇರುವುದು ಏನು?

**ಮಗು** : ಆಡು.

**ಶಿಕ್ಷಕ** : ಆ ಚಿತ್ರದ ಮುಂದೆ ಏನು ಬರೆದಿರಬಹುದು?

**ಮಗು** : ಆಡು.

**ಶಿಕ್ಷಕ** : ಹಾಗಾದರೆ ಈ ಆಡು ಎಂಬ ಪದವನ್ನು ಹೇಳುವಾಗ ಎಷ್ಟು ಅಕ್ಷರಗಳನ್ನು ಹೇಳುತ್ತೇವೆ ಹೇಳು ನೋಡೋಣ?

**ಮಗು** : (ತನ್ನ ಬೆರಳನ್ನು ಎಣಿಸುತ್ತಾ) ಆ.. ಡು.. ಎರಡು ಸರ್.

**ಶಿಕ್ಷಕ** : ಈ ಆಡು ಎಂಬಲ್ಲಿನ ಎರಡು ಅಕ್ಷರಗಳಲ್ಲಿ ಮೊದಲು ಯಾವ ಅಕ್ಷರವನ್ನು ಹೇಳುತ್ತೇವೆ? ಮತ್ತು ನಂತರ ಯಾವ ಅಕ್ಷರವನ್ನು ಹೇಳುತ್ತೇವೆ?

**ಮಗು** : 'ಆ' ಅಕ್ಷರವನ್ನು ಮೊದಲು ಹೇಳುತ್ತೇವೆ. ಅನಂತರ 'ಡು' ಹೇಳುತ್ತೇವೆ.

**ಶಿಕ್ಷಕ** : ಹಾಗಾದರೆ ಈ ಆಡು ಎನ್ನುವ ಚಿತ್ರದ ಮುಂದಿರುವ ಪದದಲ್ಲಿ 'ಆ' ಅಕ್ಷರ ಎಲ್ಲಿದೆ? 'ಡು' ಅಕ್ಷರ ಎಲ್ಲಿದೆ?

ಮಗು ಸರಿಯಾಗಿ ಆಯಾ ಅಕ್ಷರಗಳನ್ನು ಆಡು ಎಂಬ ಪದದಲ್ಲಿ ಗುರುತಿಸಿತು.

ಈ ಪದವನ್ನು ಹೀಗೆ ಪರಿಚಯಿಸಿದ ನಂತರ ಮುಂದಿನ ಚಿತ್ರ ಮತ್ತು ಪದಗಳನ್ನು

ಓದಲು ಮಗುವನ್ನು ಅಣಿಗೊಳಿಸಲಾಯಿತು. ಹೀಗೆ ಮಗುವು ಎರಡು ಅಕ್ಷರಗಳನ್ನು ಕಲಿಯಿತು. ಅನಂತರ ಕಲಿಕೆ ಎಂದರೆ ಈ ಅಕ್ಷರಗಳನ್ನು ಬಳಸಿ ಪದಗಳನ್ನು ಕಟ್ಟುವುದು. ಮುಂದಿನ ಚಿತ್ರದಲ್ಲಿ ಮೊದಲಿಗೆ ಇದ್ದದ್ದು ಕಾಡಿನ ಚಿತ್ರ ಮತ್ತು ಎರಡನೆಯ ಕಾಲಂನಲ್ಲಿ 'ಕಾ' ಎನ್ನುವ ಅಕ್ಷರವನ್ನು ನೀಡಿ ಮುಂದೆ ಖಾಲಿ ಜಾಗ ಬಿಡಲಾಗಿತ್ತು. ಅಲ್ಲಿ ಮಕ್ಕಳು 'ಡು' ಎಂದು ಹೇಳಬೇಕಾಗಿದ್ದಿತು. ಹಿಂದಿನ ಜ್ಞಾನವನ್ನು ಬಳಸಿ ಮೇಲೆ ವಿನ್ಯಾಸಗೊಳಿಸಿದ ರೂಪುರೇಷೆಯಲ್ಲಿ ಮಕ್ಕಳು 'ಕಾಡು' ಎಂದು ಹೇಳುವುದರ ಮೂಲಕ ಬಿಟ್ಟ ಸ್ಥಳವನ್ನು ತುಂಬಬೇಕಿತ್ತು. ಮೂರನೆಯ ಚಿತ್ರವು 'ಕಾಗೆ'ಯದಾಗಿದ್ದಿತು. ಈ ಪದವನ್ನು ಹಿಂದಿನ ಉಚ್ಚಾರಾಂಶವನ್ನು ಗಮನದಲ್ಲಿ ಇಟ್ಟುಕೊಂಡು ಮಗು 'ಕಾ'ವನ್ನು ಕಟ್ಟಬೇಕಿತ್ತು ಮತ್ತು 'ಗೆ' ಎನ್ನುವ ಹೊಸ ಉಚ್ಚಾರಾಂಶವನ್ನು ಪರಿಚಯಿಸಲಾಯಿತು. ಹೀಗೆ ಅಂದರೆ, ಸಂಪೂರ್ಣವಾದ ಕಾರ್ಯಹಾಳೆಯನ್ನು ಇದೇ ರೀತಿ ಪ್ರತಿ ಹಂತದಲ್ಲಿಯೂ ಪದದ ಸರಪಳಿಯಾಗಿಯೇ, ಪರಿಚಿತವಾದ್ದರಿಂದ ಅಪರಿಚಿತವಾದುದಕ್ಕೆ ಹೊಸ ಉಚ್ಚಾರಾಂಶವನ್ನು ಪರಿಚಯಿಸುವಂತೆ ಮತ್ತು ಹಿಂದೆ ಕಲಿತಿದ್ದನ್ನು ಮುಂದಿನ ಚಿತ್ರಕ್ಕೆ ಅಳವಡಿಸಿಕೊಂಡು ಮತ್ತು ಈ ಜ್ಞಾನವನ್ನು ಮುಂದಿನ ಚಿತ್ರಕ್ಕೆ ಅಳವಡಿಸಿಕೊಳ್ಳುವಂತೆ ವಿನ್ಯಾಸಗೊಳಿಸಲಾಗಿತ್ತು. ಇಂತಹ ದೃಷ್ಟಿಕೋನವು ಮಗುವಿನಲ್ಲಿ ತಾನು ಮುಂದೇನು ಕಲಿಯುತ್ತೇನೆ ಅಂದರೆ "ನಾನು ಕಲಿಯುವ ಮುಂದಿನ ಅಕ್ಷರ ಯಾವುದು?" ಎಂದು ಕೇಳುವಂತಹ ಕುತೂಹಲವನ್ನು ಉದ್ದೀಪಿಸುತ್ತದೆ. ಈ ಪ್ರಕ್ರಿಯೆ ಮಕ್ಕಳಲ್ಲಿ ಓದುವುದು ಮತ್ತು ಬರೆಯುವುದನ್ನು ಅನುಕ್ರಮಣಿಕೆಯಲ್ಲಿ ಕಲಿಸುವುದಕ್ಕೆ ಬದಲಾಗಿ ಸ್ವಾಭಾವಿಕವಾಗಿ ಕಲಿಯುವುದನ್ನು ಪ್ರೇರೇಪಿಸುತ್ತದೆ.

ಇದೇ ಪ್ರಕ್ರಿಯೆಯನ್ನು ವಾಕ್ಯಗಳನ್ನು ಓದುವಾಗ ಮತ್ತು ಬರೆಯುವಾಗಲೂ ಅನುಸರಿಸಲಾಯಿತು. ಉದಾಹರಣೆಗೆ,

ಮಕ್ಕಳಿಗೆ ಕೋತಿಯು ಮರ ಹತ್ತುವ ಚಿತ್ರವನ್ನು ತೋರಿಸಲಾಯಿತು ಮತ್ತು ಮಕ್ಕಳಿಗೆ ಕೋತಿ ಏನು ಮಾಡುತ್ತಿದೆ ಎಂದು ಹೇಳಿ ಎಂದು ಕೇಳಲಾಯಿತು.

**ಮಕ್ಕಳು** : "ಕೋತಿ ಮರ ಏರಾಕತ್ತೈತಿ" ಎಂದರು.

**ಶಿಕ್ಷಕರು** : (ವಾಕ್ಯವನ್ನು ಬರೆದು, ಮಕ್ಕಳಿಗೆ ಕೇಳಲಾಯಿತು) "ಈಗ ಹೇಳಿ ಈ ವಾಕ್ಯದ ಮೊದಲ ಪದ ಯಾವುದು?"

**ಮಕ್ಕಳು** : ಕೋತಿ.

**ಶಿಕ್ಷಕರು** : ಎರಡನೆ ಪದ ಯಾವುದು?

ಈ ರೀತಿಯಾಗಿ ಮಕ್ಕಳು ಸಂಪೂರ್ಣವಾದ ವಾಕ್ಯವನ್ನು ಓದುತ್ತಾರೆ ಮತ್ತು ಅದನ್ನು ಬರೆದುಕೊಳ್ಳುತ್ತಾರೆ. ಇದೇ ಪ್ರಕ್ರಿಯೆಯಲ್ಲಿ ಮಕ್ಕಳು ವ್ಯಾಕರಣವು ಒಳಗೊಂಡಿರುವ ನಿಯಮಗಳನ್ನು ಅರ್ಥಮಾಡಿಕೊಳ್ಳುತ್ತಾರೆ.

ಯಾವಾಗ ಈ ಕಾರ್ಯಹಾಳೆಯ ಪ್ರಾತ್ಯಕ್ಷಿಕೆಯನ್ನು ಮತ್ತು ಮಕ್ಕಳ ಕಲಿಕೆಯ ಮೇಲೆ ಆದ ಪರಿಣಾಮವನ್ನು ಶಿಕ್ಷಕರು ನೋಡಿದರೋ, ಆಗ ಇದರಲ್ಲಿ ಆಸಕ್ತಿ ತಳೆದರು. ಬಹುತೇಕ ಎಲ್ಲರೂ ಕೇಳಿದ ಒಂದು ಪ್ರಶ್ನೆಯೆಂದರೆ "ಇಂತಹ ಎಷ್ಟು ಕಾರ್ಯ

ಹಾಳೆಯನ್ನು ನಾವು ತಯಾರಿಸಬೇಕು?" ಈ ಪ್ರಶ್ನೆಯನ್ನು ನಾವು ಶಿಕ್ಷಕರಲ್ಲಿನ ಭಾಷೆ ಕಲಿಯುವಿಕೆಯ ಜ್ಞಾನವನ್ನು ಮತ್ತಷ್ಟು ಆಳವಾಗಿಸುವ ಅವಕಾಶವಾಗಿ ಬಳಸಿಕೊಂಡೆವು. ಶಿಕ್ಷಕರ ಜೊತೆಗಿನ ಚರ್ಚೆಯು ಭಾಷೆಯ ಜ್ಞಾನವನ್ನು ಕಟ್ಟುವುದರ ಅರ್ಥದ ಕಡೆಗೆ ಅಂದರೆ, ಯಾವುದು ಮುಖ್ಯವಾಗಿತ್ತೋ ಅದರ ಕಡೆಗೆ ಹೋಯಿತು. ಓದುವುದನ್ನು ಮತ್ತು ಬರೆಯುವುದನ್ನು ಕಲಿಯುವ ಈ ಪ್ರಕ್ರಿಯೆಯಲ್ಲಿ ಮಕ್ಕಳು ಅವಲೋಕಿಸುವುದು, ಹೋಲಿಸಿ ನೋಡುವುದು, ಸಂಭವನೀಯತೆಯನ್ನು ಊಹಿಸುವುದು, ಮಾದರಿಗಳನ್ನು ಹುಡುಕುವುದು ಮತ್ತು ಗುರುತಿಸುವುದು, ನಿಯಮಗಳನ್ನು ಅರ್ಥೈಸುವುದು, ನಿಯಮಗಳನ್ನು ಸಾಮಾನ್ಯೀಕರಿಸುವುದು ಮತ್ತು ವಿನ್ಯಾಸಗೊಳಿಸುವಂತಹ ವಿವೇಚನಾ ಪ್ರಕ್ರಿಯೆಯಲ್ಲಿ ತೊಡಗಿಕೊಂಡಿದ್ದರು. ಈ ಎಲ್ಲಾ ಪ್ರಕ್ರಿಯೆಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ಅಂದರೆ ಮಕ್ಕಳು ತಮ್ಮಿಂದ ತಾವೇ ಓದಲು ಮತ್ತು ಬರೆಯಲು ಕಲಿತುಕೊಳ್ಳಲು ಅನುಕೂಲವಾಗಲಿ ಎನ್ನುವ ಹಾಗೆ, ಕಾರ್ಯಹಾಳೆಯನ್ನು ಸಿದ್ಧಪಡಿಸಲಾಗಿದ್ದಿತು. ಮಕ್ಕಳು ಓದಲು ಬರೆಯಲು ಕಲಿಯಲು ಶಕ್ತರಾಗುತ್ತಿದ್ದಂತೆ, ಚಿತ್ರವಿಲ್ಲದೇ ಓದುವಂತಹ, ಹೆಚ್ಚು ಅಮೂರ್ತವಾದ ಹಂತಕ್ಕೆ ಸಾಗುತ್ತಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಒಬ್ಬ ಶಿಕ್ಷಕನು ತಿಳಿದಿರುವ ಎಲ್ಲವನ್ನು ಕಲಿಸಲು ಸಾಧ್ಯವಿಲ್ಲ. ಆದ್ದರಿಂದ ಇಲ್ಲಿ ಶಿಕ್ಷಕರ ಪಾತ್ರವೇನು ಎಂದರೆ ಮಕ್ಕಳಿಗೆ ಸ್ವತಃ ಕಲಿಯುವಿಕೆಯ ಪರಿಸ್ಥಿತಿಯನ್ನು ನಿರ್ಮಾಣ ಮಾಡುವುದು. ಕಾರ್ಯಹಾಳೆಯು ಇಂತಹ ಅವಕಾಶಕ್ಕೆ ಒಂದು ಉದಾಹರಣೆ. ಆದರೆ ಈ ಕಾರ್ಯಹಾಳೆಯನ್ನು ಬಳಸುವುದರಲ್ಲಿ ಎದುರಾದ ಒಂದು ದೊಡ್ಡ ಸವಾಲೆಂದರೆ, ಈ ಕಾರ್ಯಹಾಳೆಯಲ್ಲಿನ ಪದಗಳು ಪ್ರಮಾಣೀಕೃತವಾದ ಕನ್ನಡದಲ್ಲಿದ್ದಿತು. ಆದರೆ ಮಕ್ಕಳು ಉತ್ತರಿಸುವಾಗ ತಮ್ಮ ಸ್ಥಳೀಯ ಕನ್ನಡವನ್ನು ಬಳಸುತ್ತಾರೆ.

**ಕೋಷ್ಟಕ 1 : ಪ್ರಮಾಣೀಕೃತ ಕನ್ನಡಕ್ಕೆ ಬದಲಾಗಿ ಮಕ್ಕಳು ಬಳಸಿದ ಸ್ಥಳೀಯ ಕನ್ನಡ ಪದಗಳು**

| ಪ್ರಮಾಣೀಕೃತ ಕನ್ನಡ ಪದಗಳು | ಮಕ್ಕಳು ಬಳಸಿದ ಸ್ಥಳೀಯ ಪದಗಳು |
|---|---|
| ಆಡು | ಆಡ |
| ಕಾಡು | ಕಾಡ |
| ಕಾಗೆ | ಕಾಗಿ |

ಈ ಅನುಭವದಿಂದಾಗಿ ನಮ್ಮ ಕಾರ್ಯಹಾಳೆಯಲ್ಲಿ ಪ್ರಮಾಣೀಕೃತ ಕನ್ನಡಕ್ಕಿಂತ ಸ್ಥಳೀಯ ಪ್ರಾದೇಶಿಕ ಭಾಷೆಯು ಪ್ರತಿಬಿಂಬಿಸಬೇಕು ಎನ್ನುವುದನ್ನು ಕಂಡುಕೊಂಡೆವು. ಶಿಕ್ಷಕರ ಸಹಯೋಗದಿಂದಾಗಿ, ಪಠ್ಯ ಪುಸ್ತಕದಲ್ಲಿ ಪ್ರಾದೇಶಿಕ ಮತ್ತು ಪ್ರಮಾಣೀಕೃತವಾದ ಕನ್ನಡಗಳಲ್ಲಿರುವ ಒಂದೇ ರೀತಿಯಲ್ಲಿ ಬಳಕೆಯಿರುವ – ಉದಾಹರಣೆಗೆ 'ಕುರಿ', 'ಕೋಳಿ', 'ನರಿ' ಇತ್ಯಾದಿ – ಪದಗಳನ್ನು ಪಟ್ಟಿ ಮಾಡಿಕೊಂಡೆವು. ಹೀಗೆ ಒಂದೇ ರೀತಿಯಾಗಿ ಬಳಕೆಯಲ್ಲಿರುವ ಪದಗಳನ್ನು ಆಧಾರವಾಗಿಟ್ಟುಕೊಂಡು ಕಾರ್ಯ

ಹಾಳೆಯನ್ನು ಪುನರ್ ವಿನ್ಯಾಸಗೊಳಿಸಿಕೊಳ್ಳಲಾಯಿತು. ಕಾರ್ಯಹಾಳೆಯನ್ನು ಬಳಸುವ ಪ್ರಕ್ರಿಯೆ ಮಾತ್ರ ಹಿಂದಿನಂತೆ ಇದ್ದಿತು. ಈ ರೀತಿಯಲ್ಲಿ ಕಾರ್ಯಹಾಳೆಯನ್ನು ಬಳಸುವ ಪ್ರಕ್ರಿಯೆಯು ಮಕ್ಕಳಿಗೆ ಕನ್ನಡ ಭಾಷೆಯ ಪದಗಳ ಜ್ಞಾನ ಮತ್ತು ಅಕ್ಷರಗಳನ್ನು ಕಲಿಯುವುದನ್ನು ಸುಲಭ ಮಾಡಿಕೊಟ್ಟಿತು ಎನ್ನುವುದನ್ನು ನಾವು ಕಂಡುಕೊಂಡೆವು. ಇದರೊಟ್ಟಿಗೆ, ಮಕ್ಕಳು ಈ ಅಕ್ಷರಗಳು ಇತರ ಪದಗಳೊಂದಿಗೆ ಇದ್ದಾಗಲೂ ಗುರುತಿಸುವಲ್ಲಿ ಸಮರ್ಥರಾಗಿದ್ದರು. ಒಟ್ಟಾರೆಯಾಗಿ, ಮಕ್ಕಳಿಗೆ ಅಕ್ಷರಗಳನ್ನು ಒಂದಾದ ಮೇಲೆ ಒಂದು ಎನ್ನುವಂತೆ ಸರದಿ ಪ್ರಕಾರವೇ ಕಲಿಸಬೇಕು ಎಂದೇನೂ ಇಲ್ಲ. ಮಾದರಿಗಳ ಆಧಾರದ ಮೇಲೆ ವಿಶ್ಲೇಷಣೆ ಮಾಡುವ ಸಾಮರ್ಥ್ಯ ಸಾದೃಶ್ಯಗಳು ಮಕ್ಕಳಿಗೆ ಪದಗಳನ್ನು ಕಲಿತುಕೊಳ್ಳುವುದನ್ನು ಸುಲಭವಾಗಿಸಿತು.

ಶಿಕ್ಷಕರುಗಳು ಸಹ, ಓದುವ ಮತ್ತು ಬರೆಯುವ ಇಂತಹ ದೃಷ್ಟಿಕೋನವು ಭಾಷೆಯನ್ನು ಹೆಚ್ಚು ಪರಿಣಾಮಕಾರಿಯಾಗಿ ದಕ್ಕಿಸಿಕೊಳ್ಳುವಲ್ಲಿ ಸಹಾಯಮಾಡುತ್ತದೆ ಎನ್ನುವುದನ್ನು ಕಂಡುಕೊಂಡರು. ಇದನ್ನು ಸಂಕ್ಷಿಪ್ತವಾಗಿ ಶಿಕ್ಷಕರೊಬ್ಬರ ಮಾತಿನಲ್ಲಿಯೇ ತಿಳಿಸುವುದಾದರೆ: "ನಾವು ಇಂತಹ ಸಾಮರ್ಥ್ಯಗಳನ್ನು ಮೂರನೆಯ ತರಗತಿಯ ಮಕ್ಕಳಿಗೆ ಕಲಿಸುವುದಕ್ಕೆ ಸಾಕಷ್ಟು ಕಷ್ಟಪಡುತ್ತಿದ್ದೆವು. ಆದರೆ ನೀವು, ಕೇವಲ ಒಂದನೇ ತರಗತಿಯ ಮಕ್ಕಳಿಗೆ, ಅದೂ ಎರಡೇ ತಿಂಗಳ ಕಾಲಾವಧಿಯಲ್ಲಿ ಸರಳವಾದ ವಾಕ್ಯಗಳನ್ನು ಓದುವ ಮಟ್ಟಿಗೆ ಕಲಿಸುವುದರಲ್ಲಿ ಯಶಸ್ವಿಯಾಗಿದ್ದೀರಿ."

## ಅರ್ಥ ಆಧಾರಿತವಾದ ಓದು ಮತ್ತು ಬರೆಯುವ ದೃಷ್ಟಿಕೋನದ ಪ್ರಸರಣೆ

ಸುರಪುರ ತಾಲೂಕಿನ ಬೇರೆ ಬೇರೆ ಕಡೆಗಳಲ್ಲಿ ಇರುವ ಐದು ಪ್ರಾಥಮಿಕ ಶಾಲೆಗಳಲ್ಲಿ ಮೊದಲಿಗೆ ನಾವು ಕೆಲಸಮಾಡಿದೆವು. ಕಾರ್ಯಹಾಳೆಯನ್ನು ಕನ್ನಡ ಶಿಕ್ಷಕರ ಜೊತೆಗೆ ಸೇರಿ ವಿನ್ಯಾಸಗೊಳಿಸಲಾಗಿತ್ತು. ಅನಂತರ ಇವನ್ನು (ಪ್ರಕ್ರಿಯೆಯು ಅವರಿಗೆ ಪರಿಚಿತವಾಗಲಿ ಎನ್ನುವುದಕ್ಕಾಗಿ ಶಿಕ್ಷಕರ ಸಹಯೋಗದಲ್ಲಿ) ಮಕ್ಕಳ ಭಾಷಾ ಕಲಿಕೆಗೆ ಬಳಸಲಾಯಿತು. ಇದರಿಂದ ಮಕ್ಕಳಲ್ಲಿ ಭಾಷೆಯ ಸಾಮರ್ಥ್ಯವನ್ನು ಹೆಚ್ಚಿಸುವಲ್ಲಿ ಈ ದೃಷ್ಟಿಕೋನದ ಪ್ರಭಾವವನ್ನು ಕಂಡುಕೊಳ್ಳಲು ಶಿಕ್ಷಕರುಗಳಿಗೆ ಸಾಧ್ಯವಾಯಿತು. ನಮಗೆ ಮತ್ತು ಶಿಕ್ಷಕರಿಗೆ ಈ ದೃಷ್ಟಿಕೋನದ ಮಹತ್ವವು ಮನವರಿಕೆಯಾದ ಮೇಲೆ ಇದನ್ನು ಟಿ.ಇ.ಎಸ್.ಎಸ್. (TESS - Teacher Education through School-based Support) ಸಂಸ್ಥೆ ಮತ್ತು ಕಕ್ಕೆರದ ಶಿಕ್ಷಕ ಕಲಿಕಾ ಕೇಂದ್ರಗಳಿಂದ (TLC - Teacher Learning Center) ಬಂದ 60 ಶಿಕ್ಷಕರ ಬಳಿ ಹಂಚಿಕೊಂಡೆವು ಮತ್ತು ಚರ್ಚಿಸಿದೆವು. ನಮ್ಮೊಂದಿಗೆ ಕೆಲಸಮಾಡಿದ ಮತ್ತು ಕಾರ್ಯಹಾಳೆಯನ್ನು ಬಳಸಿದ ಐದು ಶಾಲೆಯ ಶಿಕ್ಷಕರುಗಳು ಈ ಚರ್ಚೆಯನ್ನು ಮುನ್ನಡೆಸಿ, ಅದರಲ್ಲಿ ಪರಿಣಾಮ, ಸವಾಲು, ಸಮಯ, ಸಿದ್ಧತೆಗಳ ಬಗೆಗೆ ಚರ್ಚಿಸಿದರು. ಈ ಟಿ.ಎಲ್.ಸಿ.ಯ ಜೊತೆಗಿನ ಚರ್ಚೆಯಿಂದ ಅನೇಕ ಶಿಕ್ಷಕರು ಈ ದೃಷ್ಟಿಕೋನವನ್ನು ಒಪ್ಪಿಕೊಂಡು ಮಾತ್ರವಲ್ಲ ಇದನ್ನು ಇತ್ಯಾತ್ಮಕವಾದ ನೆಲೆಯಲ್ಲಿ ನೋಡಿದರು. ಪ್ರಾಥಮಿಕ ಶಾಲೆಯ ಶಿಕ್ಷಕರು ಓದು ಮತ್ತು ಬರವಣಿಗೆಗಳ

ಸಾಮರ್ಥ್ಯಗಳಿಗೆ ಸಂಬಂಧಿಸಿದಂತೆ ಕಾರ್ಯಹಾಳೆಯನ್ನು ಬಳಸಲು ಮತ್ತು ವಿನ್ಯಾಸಗೊಳಿಸಲಾರಂಭಿಸಿದರು.

**ಉಪಸಂಹಾರ**

ಮೇಲೆ ಹೇಳಿದಂತೆ, ಈ ಪ್ರಕ್ರಿಯೆಯಲ್ಲಿ ಶಿಕ್ಷಕರ ಪಾತ್ರವು ಕಲಿಯುವ ಅವಕಾಶಗಳಿಗೆ ಅನುವು ಮಾಡಿಕೊಡುವುದು. ಇದಕ್ಕೆ ಶಿಕ್ಷಕರಲ್ಲಿ ಮಕ್ಕಳು ಶಾಲೆಗೆ ತರುವ ಭಾಷಿಕ ಸಂಪನ್ಮೂಲಗಳ ಬಗೆಗೆ ಜ್ಞಾನವಿರಬೇಕಾಗುತ್ತದೆ. ಅದರ ಮೌಲ್ಯವನ್ನು ಗುರುತಿಸುವುದರ ಜೊತೆಗೆ ಅದನ್ನು ಆಧಾರವಾಗಿಟ್ಟುಕೊಂಡು ಕಲಿಕೆಗೆ ಸಹಾಯ ಮತ್ತು ಯೋಜನೆಯನ್ನು ರೂಪಿಸಬೇಕು. ಸಾಕ್ಷರತೆಯನ್ನು ಹೆಚ್ಚಿಸುವ ಈ ದೃಷ್ಟಿಕೋನವು ಮಕ್ಕಳಲ್ಲಿ ಸುತ್ತಮುತ್ತಲಿನ ಪರಿಸರದ (ಇದು ಭಾಷಿಕ ಪರಿಸರವನ್ನು ಒಳಗೊಳ್ಳುತ್ತದೆ) ಸಂಪರ್ಕದಲ್ಲಿದ್ದರೆ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ ಹಾಗೂ ಮಕ್ಕಳ ಓದುವಿಕೆ ಮತ್ತು ಬರೆಯುವಿಕೆಯನ್ನು ಇದು ಹೆಚ್ಚು ಅರ್ಥಪೂರ್ಣವಾಗಿಸುತ್ತದೆ.

**ಚನ್ನಪ್ಪ ಯಂಟಮಾನ**: ಕನ್ನಡ ಭಾಷೆ ಮತ್ತು ಭಾಷಾ ಬೋಧನೆ ವಿಷಯದಲ್ಲಿ ಬಿಎಡ್ ಹಾಗೂ ಕನ್ನಡ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಅಜೀಮ್ ಪ್ರೇಮ್‌ಜಿ ಫೌಂಡೇಷನ್, ಯಾದಗಿರಿ ಜಿಲ್ಲಾ ಸಂಸ್ಥೆಯಲ್ಲಿ ಆರಂಭಿಕ ಭಾಷಾ ಶಿಕ್ಷಣದಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಶಿಕ್ಷಕರ ವೃತ್ತಿಪರ ಬೆಳವಣಿಗೆಯಲ್ಲಿ ಹನ್ನೊಂದು ವರ್ಷಗಳಿಂದ ಕಾರ್ಯ ನಿರ್ವಹಿಸುತ್ತಿದ್ದಾರೆ.

*ಸಂಪರ್ಕ:* channappa.y@azimpremjifoundation.org